# ಕರ್ನಾಟಕ ವಿಧಾನ ಪರಿಷತ್ತ್

| | |
|---|---|
| ಸದಸ್ಯರ ಹೆಸರು | ಶ್ರೀ ಹೆಚ್. ಎಂ. ರಮೇಶ್ ಗೌಡ, (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 414 |
| ಉತ್ತರ ದಿನಾಂಕ | **04.02.2021**(ಇಂಧನ ಇಲಾಖೆಯಿಂದ ವರ್ಗಾಯಿತಗೊಂಡ ಪ್ರಶ್ನೆ) |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಜಾರಿ ಇರುವ "ಗ್ರಾಮೀಣ ಭಾರತಕ್ಕೆ ಸಸ್ಯಾಧಾರಿತ ವಿದ್ಯುತ್" (Biomass Energy for Rural India ) ಯೋಜನೆಯ ನಿರ್ವಹಣೆಯನ್ನು ಯಾವ ಮಂಡಳಿಗೆ ವಹಿಸಲಾಗಿದೆ : | "ಗ್ರಾಮೀಣ ಭಾರತಕ್ಕೆ ಸಸ್ಯಾಧಾರಿತ ವಿದ್ಯುತ್" (Biomass Energy for Rural India - "BERI" ) ಯೋಜನೆಯನ್ನು ಸರ್ಕಾರ ದಿ.31.01.2014 ರಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಗೆ ಹಸ್ತಾಂತರಿಸಿದೆ. |
| ಆ) | ಹಾಗಿದ್ದಲ್ಲಿ ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಯು ಈ ಯೋಜನೆಯ ಪುನರರಾಂಭಕ್ಕೆ ತಜ್ಞರ ಸಮಿತಿಯನ್ನು ರಚಿಸಲಾಗಿದೆಯೇ? ಹಾಗಿದ್ದಲ್ಲಿ, ಈ ತಜ್ಞರ ಸಮಿತಿಯನ್ನು ರಚಿಸಿರುವ ಉದ್ದೇಶವೇನು; ಅದರ ಕಾರ್ಯವ್ಯಾಪ್ತಿ ಏನು; | ದಿ.26.03.2014 ರಂದು ಜರುಗಿದ ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಯ 11ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಬೆರಿ ಯೋಜನೆಯ ಪುನರಾರಂಭಕ್ಕೆ ಶ್ರೀ ವೈ. ಬಿ. ರಾಮಕೃಷ್ಣ, ಮಂಡಳಿಯ ಹಿಂದಿನ ಕಾರ್ಯಾಧ್ಯಕ್ಷರು ಅವರ ಅಧ್ಯಕ್ಷತೆಯಲ್ಲಿ ತಜ್ಞರ ಉಪ ಸಮಿತಿಯನ್ನು ರಚಿಸಲಾಗಿತ್ತು. ಈ ಉಪ ಸಮಿತಿಯಲ್ಲಿ ಪ್ರೋ. ಉಡಿಪಿ ಶ್ರೀನಿವಾಸ, ಭಾರತೀಯ ವಿಜ್ಞಾನ ಮಂದಿರ(ಐ.ಐ.ಎಸ್.ಸಿ) ಹಾಗೂ ಮಂಡಳಿಯ ಕಾರ್ಯಕಾರಿ ಸಮಿತಿ ಸಹ ಸದಸ್ಯರು, ಶ್ರಿ ಕೆ.ಕ್ರಿಷನ್, ಮಂಡಳಿಯ ಕಾರ್ಯಕಾರಿ ಸಮಿತಿ ಸಹ ಸದಸ್ಯರು, ನಿರ್ದೇಶಕರು, (ಗ್ರಾಮೀಣ ಇಂಧನ) ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿ, ಶ್ರೀ ದಿವಾಕರ್ ರಾವ್, ಮಂಡಳಿಯ ಕಾರ್ಯಕಾರಿ ಸಮಿತಿ ಸಹ ಸದಸ್ಯರು ಹಾಗೂ ಪ್ರೋ. ದಾಸಪ್ಪ, ಸಿ.ಜಿ.ಪಿ.ಎಲ್. ಭಾರತೀಯ ವಿಜ್ಞಾನ ಮಂದಿರ(ಐ.ಐ.ಎಸ್.ಸಿ) – ಆಹ್ವಾನಿತರು.<br><br>**ಉಪ ಸಮಿತಿಯ ಉದ್ದೇಶಗಳು :**<br>1. ಉಪ ಸಮಿತಿಯು ಬೆರಿ ಯೋಜನೆಯನ್ನು ಪುನಶ್ಚೇತನಗೊಳಿಸಲು ಕೈಗೊಳ್ಳಬೇಕಾದ ಕಾರ್ಯಯೋಜನೆ ರೂಪಿಸಿ, ಅಗತ್ಯ ಸಲಹೆಗಳೊಂದಿಗೆ ವರದಿಯನ್ನು ಸಿದ್ಧಗೊಳಿಸುವುದು.<br>2. ಬೆರಿ ಯೋಜನೆಗೆ ಸಂಬಂಧಿಸಿದ ತಜ್ಞರೊಂದಿಗೆ ಚರ್ಚಿಸಿ ಯೋಜನೆಯ ತಾಂತ್ರಿಕತೆ, ಆರ್ಥಿಕ ಹಾಗೂ ಸಂಪನ್ಮೂಲ ಕ್ರೋಢೀಕರಣ ಕುರಿತಂತೆ ಯೋಜನೆಯನ್ನು ಪುನಶ್ಚೇತನಗೊಳಿಸುವ ಕುರಿತು ವರದಿಯನ್ನು ಸಲ್ಲಿಸುವುದು.<br><br>**ಕಾರ್ಯವ್ಯಾಪ್ತಿ :**<br>ಬೆರಿ ಯೋಜನೆಯ ಮೂರು ಘಟಕಗಳಾದ ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕಿನ ಕಬ್ಬಿಗೆರೆ, ಮಧುಗಿರಿ ತಾಲ್ಲೂಕಿನ ಬೋರಾಗುಂಟೆ ಮತ್ತು ಸೀಬಿನಯ್ಯನಪಾಳ್ಯ. |
| ಇ) | ಆ ಸಮಿತಿಯು ವರದಿ ಸಲ್ಲಿಸಲು ಕಾಲಮಿತಿಯೇನಾದರೂ ವಿಧಿಸಲಾಗಿದೆಯೇ; ಹಾಗಿದ್ದಲ್ಲಿ ವರದಿ ಸಲ್ಲಿಸುವ ಬಗ್ಗೆ ಸಮಿತಿ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಮಂಡಳಿಯು ಬೆರಿ ಯೋಜನೆ ಪುನಶ್ಚೇತನ ಕುರಿತು ವರದಿ ಸಲ್ಲಿಸಲು ಉಪ ಸಮಿತಿಗೆ ಮೂರು ತಿಂಗಳ ಕಾಲಾವಧಿಯನ್ನು ನಿಗಧಿಗೊಳಿಸಿತ್ತು. ಉಪ ಸಮಿತಿಯನ್ನು ವರದಿಯನ್ನು ಸಿದ್ಧಗೊಳಿಸಿ ಮಂಡಳಿಗೆ ನವೆಂಬರ್ 2014 ರಲ್ಲಿ ಸಲ್ಲಿಸಿದೆ. |

| | | |
|---|---|---|
| ಈ) | ಸರ್ಕಾರದ ಮಹತ್ತರವಾದ ಈ ಯೋಜನೆಯ ಅನುಷ್ಠಾನಕ್ಕಾಗಿ ತುಮಕೂರು ಜಿಲ್ಲೆಯಲ್ಲಿ ಕೋಟ್ಯಾಂತರ ರೂಪಾಯಿ ಹಣ ಹೂಡಿಕೆ ಮಾಡಿ ಈ ಯೋಜನೆಯನ್ನು ನಿಲ್ಲಿಸಲು ಕಾರಣಗಳೇನು? (ವಿವರ ನೀಡುವುದು) | 1) ಬಯೋಮಾಸ್ ಎನರ್ಜಿ ಫಾರ್ ರೂರಲ್ ಇಂಡಿಯಾ (BERI) ಯೋಜನೆಯು, UNDP-GEF, ICEF, GOI ಮತ್ತು GOK ಇವುಗಳ ಹಣಕಾಸಿನ ನೆರವಿನಿಂದ ಏಪ್ರಿಲ್-2001 ರಲ್ಲಿ ತುಮಕೂರು ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬಂದಿರುತ್ತದೆ. ಯೋಜನೆಯಡಿ ಬಯೋಮಾಸ್ (Woody Biomass) ನಿಂದ ವಿದ್ಯುತ್ ಉತ್ಪಾದಿಸಿ, ಗ್ರಾಮೀಣ ಪ್ರದೇಶಗಳ ನಿತ್ಯದ ಅವಶ್ಯಕತೆಗಳಿಗೆ ವಿದ್ಯುತ್ ಪೂರೈಕೆ ಮಾಡುವ ಆಶಯ ಹೊಂದಿತ್ತು.<br><br>2) 'ಬೆರಿ' ಯೋಜನೆಯಡಿ ಮೂರು ಪವರ್ ಪ್ಲಾಂಟ್ (ಕಬ್ಬಿಗೆರೆ ಕೊರಟಗೆರೆ ತಾಲ್ಲೂಕು, ಬೋರಿಗುಂಟೆ ಹಾಗೂ ಸೀಬಿನಯ್ಯನಪಾಳ್ಯ ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ) ಗಳನ್ನು ಸ್ಥಾಪಿಸಿದ್ದು, ಕಬ್ಬಿಗೆರೆ ಘಟಕವನ್ನು ಚಾಲನೆಮಾಡಿ ಸುಮಾರು 15 ಲಕ್ಷ ಯೂನಿಟ್ ಸಸ್ಯಾಧಾರಿತ ವಿದ್ಯುತ್ ಉತ್ಪಾದಿಸಿ ಬೆಸ್ಕಾಂ ಗ್ರಿಡ್‌ಗೆ ಹರಿಸಲಾಗಿದೆ. ಬೋರೆಗುಂಟೆ ಮತ್ತು ಸೀಬಿನಯ್ಯನಪಾಳ್ಯದಲ್ಲಿರುವ ಘಟಕಗಳನ್ನು ತಾಂತ್ರಿಕ ಕಾರಣ / ಅನುದಾನದ ಕೊರತೆಯಿಂದ ಚಾಲನೆ ಮಾಡಿರುವುದಿಲ್ಲ.<br><br>3) ಬೆರಿ ಯೋಜನೆಯ ಘಟಕಗಳಲ್ಲಿ ವಿದ್ಯುತ್ ಉತ್ಪಾದನಾ ವೆಚ್ಚ ಪ್ರತಿ ಯುನಿಟ್‌ಗೆ ರೂ.8.50 ಆಗಲಿದ್ದು ವಿದ್ಯುತ್ ಖರೀದಿ ದರ ರೂ.2.85 ಇರುತ್ತದೆ (Power Purchase Agreement – PPA).<br><br>4) ಬೆರಿ ಯೋಜನೆಯ ಯಂತ್ರೋಪಕರಣಗಳ ಪೂರೈಕೆದಾರರು ಕೇವಲ ಒಂದು ಘಟಕವನ್ನು ಮಾತ್ರ ವಿದ್ಯುತ್ ಉತ್ಪಾದನೆಯನ್ನು ಆರಂಬಿಸಿ, ಉಳಿದ ಎರಡು ಘಟಕಗಳನ್ನು ತಾಂತ್ರಿಕ ಕಾರಣಗಳಿಂದ ವಿದ್ಯುತ್ ಉತ್ಪಾದನೆಯನ್ನು ಆರಂಭಿಸಲು ಸಾಧ್ಯವಾಗದೆ ಹಾಗೆಯೇ ತಟಸ್ಥಗೊಳಿಸಲಾಗಿತ್ತು.<br><br>5) ಬೆರಿ ಯೋಜನೆಯ ವಿದ್ಯುತ್ ಉತ್ಪಾದನೆಗೆ ಅಗತ್ಯ ಮರದ ಕಟ್ಟಿಗೆಯ ನಿರಂತರ ಪೂರೈಕೆಯು ಸಾಧ್ಯವಾಗದಿರುವುದು, ಹಾಗೂ ವಿದ್ಯುತ್ ಉತ್ಪಾದನಾ ವೆಚ್ಚ BESCOM ಖರೀದಿ ದರಕ್ಕಿಂತ ಹೆಚ್ಚಾಗಿರುವುದು ಕಚ್ಚಾವಸ್ತುಗಳ ದರವು ಪ್ರಮುಖ ಪಾತ್ರವಹಿಸಿರುವುದು ಯೋಜನೆಯ ಸ್ಥಗಿತಕ್ಕೆ ಕಾರಣವಾಗಿದೆ. |
| ಉ) | ಈ ಯೋಜನೆಯನ್ನು ಪುನರಾರಂಭಿಸಿದ ನಂತರ ರಾಜ್ಯದ ಎಲ್ಲಾ ಭಾಗಗಳಿಗೂ ವಿಸ್ತರಿಸುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ; ಹಾಗಿದ್ದಲ್ಲಿ ಈ ಯೋಜನೆಯನ್ನು ಯಾವ ಯಾವ ಜಿಲ್ಲೆಗಳಿಗೆ ಮತ್ತು ಯಾವಾಗ ವಿಸ್ತರಿಸಲಾಗುವುದು; ಈ ಕುರಿತು ಸರ್ಕಾರದ ನಿಲುವೇನು? | 'ಬೆರಿ' ಯೋಜನೆಯು 2012 ರಿಂದ ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು ವಿದ್ಯುತ್ ಉತ್ಪಾದನೆಯನ್ನು ಮಾಡಿರುವುದಿಲ್ಲ. ಈ ಯೋಜನೆಯ ಎಲ್ಲಾ ಯಂತ್ರೋಪಕರಣಗಳು ಸಂಪೂರ್ಣವಾಗಿ ಶಿಥಿಲಗೊಂಡು ಪುನರಾರಂಭಕ್ಕೆ ಯೋಗ್ಯವಾಗಿರುವುದಿಲ್ಲ. ಹಾಗೆಯೇ ಈ ಘಟಕಗಳಲ್ಲಿ ಉತ್ಪಾದಿಸಲಾಗುವ ವಿದ್ಯುತ್ ಯುನಿಟ್ ದರವು ಇತರ ಮೂಲಗಳಿಂದ ಉತ್ಪಾದಿಸಲಾಗುವ ವಿದ್ಯುತ್ ದರಕ್ಕಿಂತ ಹೆಚ್ಚಿನದಾಗಿರುವುದರಿಂದ ಸರ್ಕಾರವು ರಾಜ್ಯದ ಎಲ್ಲಾ ಭಾಗಗಳಿಗೂ ವಿಸ್ತರಿಸುವ ಕುರಿತು ಸರ್ಕಾರ ಚಿಂತನೆ ನಡೆಸಿರುವುದಿಲ್ಲ. |

ಕಡತ ಸಂಖ್ಯೆ: ಕೆಪಿಆರ್‌ಸಿ /ಡಿಡಿ4/ಬಿಜಿಎಸ್/10/2021

ಬೆಂಗಳೂರು, ದಿನಾಂಕ 01.02.2021

( ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

## ಪೂರಕ ಟಿಪ್ಪಣಿ

**ಕರ್ನಾಟಕ ವಿಧಾನ ಪರಿಷತ್ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ :414 ಗೆ ಪೂರಕ ಟಿಪ್ಪಣಿ**

ಬಯೋಮಾಸ್ ಎನರ್ಜಿ ಫಾರ್ ರೂರಲ್ ಇಂಡಿಯಾ (BERI) ಯೋಜನೆಯು, UNDP-GEF, ICEF, GOI ಮತ್ತು GOK ಇವುಗಳ ಹಣಕಾಸಿನ ನೆರವಿನಿಂದ ಏಪ್ರಿಲ್–2001 ರಲ್ಲಿ ತುಮಕೂರು ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬಂದಿತ್ತು. ಈ ಯೋಜನೆಯಡಿ ಬಯೋಮಾಸ್ (Woody Biomass) ನಿಂದ ವಿದ್ಯುತ್ ಉತ್ಪಾದಿಸಿ, ಗ್ರಾಮೀಣ ಪ್ರದೇಶಗಳ ನಿತ್ಯದ ಅವಶ್ಯಕತೆಗಳಿಗೆ ವಿದ್ಯುತ್ ಪೂರೈಕೆ ಮಾಡುವ ಆಶಯ ಹೊಂದಿತ್ತು.

'ಬೆರಿ' ಯೋಜನೆಯಡಿ ಮೂರು ಪವರ್ ಪ್ಲಾಂಟ್ (ಕಬ್ಬಿಗೆರೆ ಕೊರಟಗೆರೆ ತಾಲ್ಲೂಕು, ಬೋರಿಗುಂಟೆ ಹಾಗೂ ಸೀಬಿನಯ್ಯನಪಾಳ್ಯ ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ) ಗಳನ್ನು ಸ್ಥಾಪಿಸಿದ್ದು, ಕಬ್ಬಿಗೆರೆ ಘಟಕವನ್ನು ಚಾಲನೆಮಾಡಿ ಸುಮಾರು 15 ಲಕ್ಷ ಯೂನಿಟ್ ಸಸ್ಯಾಧಾರಿತ ವಿದ್ಯುತ್ ಉತ್ಪಾದಿಸಿ ಬೆಸ್ಕಾಂ ಗ್ರಿಡ್‌ಗೆ ಹರಿಸಲಾಗಿದೆ. ಬೋರೆಗುಂಟೆ ಮತ್ತು ಸೀಬಿನಯ್ಯನಪಾಳ್ಯದಲ್ಲಿರುವ ಘಟಕಗಳನ್ನು ತಾಂತ್ರಿಕ ಕಾರಣ / ಅನುದಾನದ ಕೊರತೆಯಿಂದ ಚಾಲನೆ ಮಾಡಲಾಗಲಿಲ್ಲ.

ಈ ಯೋಜನೆಯ ಅವಧಿ ಡಿಸೆಂಬರ್ 2012ನೇ ಸಾಲಿನಲ್ಲಿ ಪೂರ್ಣಗೊಂಡಿದ್ದು, ಸ್ಥಗಿತಗೊಂಡಿದ್ದ ಘಟಕಗಳ ಉಸ್ತುವಾರಿಗಾಗಿ ಸಂಪೂರ್ಣ ಜವಾಬ್ದಾರಿಯನ್ನು ಮಂಡಳಿಗೆ ನೀಡುವ ಉದ್ದೇಶದಿಂದ ಸರ್ಕಾರ ದಿ. 31.01.2014 ರಿಂದ ಜಾರಿಗೆ ಬರುವಂತೆ "ಬೆರಿ" ಯೋಜನೆಯನ್ನು ಮಂಡಳಿಗೆ ಹಸ್ತಾಂತರಿಸಿದೆ. 'ಬೆರಿ' ಯೋಜನೆಯನ್ನು ಪುನ:ಶ್ಚೇತನಗೊಳಿಸಲು ಮಂಡಳಿ ತಜ್ಞರ ಸಮಿತಿಯನ್ನು ನೇಮಿಸಿತ್ತು. ಆ ತಜ್ಞರ ಸಮಿತಿಯ ವರದಿಯಲ್ಲಿನ ಶಿಫಾರಸ್ಸಿನನ್ವಯ ಪುನ:ಶ್ಚೇತನಕ್ಕಾಗಿ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು.

ದಿ.06.05.2019 ರಂದು ಜರುಗಿದ ಮಂಡಳಿಯ 30 ನೇ ಕಾರ್ಯಕಾರಿ ಸಮಿತಿ ಸಭೆಯ ಅನುಮೋದನೆಗೆ ಅನುಗುಣವಾಗಿ ಈ ಮೂರು ಘಟಕಗಳಲ್ಲಿನ ಯಂತ್ರೋಪಕರಣಗಳು ಸಂಪೂರ್ಣ ಶಿಥಿಲಗೊಂಡಿದ್ದು ಅವುಗಳ ಸ್ಥಿತಿಗತಿಗಳ ಅಧ್ಯಯನ ಮತ್ತು ಮೌಲ್ಯ ನಿರ್ಧಾರ ಮಾಡಲು ಪರಿಣಿತ ಸಂಸ್ಥೆಯಾದ ಮೆ. ಟೆಕ್ನಿಕಲ್ ಕನ್‌ಸಲ್ಟೆನ್ಸಿ ಸರ್ವೀಸಸ್ ಆರ್ಗನೈಸೇಶನ್ ಆಫ್ ಕರ್ನಾಟಕ (A body under Commerce and Industries Department, Government of Karnataka) ಅವರಿಂದ ಅಧ್ಯಯನ ನಡೆಸಿ ವರದಿಯನ್ನು ಪಡೆದು ಈ ಯೋಜನೆಗೆ ಸಂಬಂಧಿಸಿದ ಎಲ್ಲಾ ಯಂತ್ರೋಪಕರಣಗಳ ವಿಲೇವಾರಿ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು.

24/1/21